# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 776
ಸದಸ್ಯರ ಹೆಸರು : ಶ್ರೀ ಬಸವರಾಜ ಪಾಟೀಲ್ ಇಟಗಿ
ಉತ್ತರಿಸುವ ದಿನಾಂಕ : 17.09.2021.
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಗಂಗಾ ಕಲ್ಯಾಣ ಯೋಜನೆ ಅನುಷ್ಠಾನದಲ್ಲಿ ಸಾಕಷ್ಟು ಅವ್ಯವಹಾರಗಳು ನಡೆಯುತ್ತಿರುವುದು ಮತ್ತು ರೈತರಿಗೆ ಕಳಪೆ ದರ್ಜೆಯ ಸಾಮಾಗ್ರಿಗಳನ್ನು ನೀಡಿ ವಂಚಿಸಲಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಕೈಗೊಂಡ ಕ್ರಮವೇನು; ಕೆಲವು ಕಂಪನಿಗಳನ್ನು ಸೂಕ್ತ ಮಾನದಂಡಗಳನ್ನು ಅನುಸರಿಸಿ ಸಂಪೂರ್ಣ ಯೋಜನೆಯನ್ನು Turnkey ಆಧಾರದ ಮೇಲೆ ಇಂತಹ ಪ್ರತಿಷ್ಠಿತ ಹಾಗೂ ಉತ್ತಮ ಗುಣಮಟ್ಟದ ಪಂಪ ತಯಾರಿಸುವ ಕಂಪನಿಗಳಿಗೆ ವಹಿಸಿಕೊಡುವುದು ಸಮಂಜಸವಲ್ಲವೇ; | ಗಂಗಾ ಕಲ್ಯಾಣ ಯೋಜನೆಯ ಅನುಷ್ಠಾನದಲ್ಲಿ ಅವ್ಯವಹಾರದ ಬಗ್ಗೆ ಆರೋಪಗಳು ಬಂದಿದ್ದು, ಆರೋಪಗಳ ಬಗ್ಗೆ ತನಿಖೆ ನಡೆಸಲು ವಿಧಾನ ಪರಿಷತ್ತಿನ ವಿಶೇಷ ಸದನ ಸಮಿತಿಯನ್ನು ರಚಿಸಲಾಗಿದ್ದು, ತನಿಖೆ ಪ್ರಗತಿಯಲ್ಲಿದೆ.<br>2019-20 ಮತ್ತು 2020-21 ನೇ ಸಾಲಿನ ಕೊಳವೆಬಾವಿಗಳನ್ನು ಕೊರೆಯಲು, ಪಂಪ್‌ಸೆಟ್ ಸರಬರಾಜು, ಅಳವಡಿಕೆ ಮತ್ತು ವಿದ್ಯುದ್ದೀಕರಣಗೊಳಿಸುವ ಕೆಲಸಗಳನ್ನು ಒಟ್ಟಿಗೆ ನಿರ್ವಹಿಸಲು Turnkey ಆಧಾರದ ಮೇಲೆ ಟೆಂಡರ್ ಕರೆಯಲಾಗಿದೆ.<br>ಕೆ.ಟಿ.ಪಿ.ಪಿ ನಿಯಮದ ಪ್ರಕಾರ ಪಾರದರ್ಶಕವಾಗಿ ಟೆಂಡರ್ ಕರೆಯುವುದರಿಂದ ಅನೇಕ ತಾಂತ್ರಿಕ ನಿಬಂಧನೆಗಳನ್ನು ಅಳವಡಿಸಿಕೊಂಡು ಟೆಂಡರ್ ಕರೆಯಲು ಕ್ರಮ ಜರುಗಿಸಲಾಗುತ್ತಿದೆ. ಆದರೆ ಕೆಲವೇ ಕೆಲವು ಕಂಪನಿಗಳನ್ನು ಆಯ್ಕೆ ಮಾಡಿಕೊಳ್ಳಲು ಅವಕಾಶವಿಲ್ಲ. ತಾಂತ್ರಿಕ ನಿಬಂಧನೆಗಳನ್ನು ಪೂರೈಸುವ ಯಾವುದೇ ಗುತ್ತಿಗೆದಾರರು ಟೆಂಡರಿನಲ್ಲಿ ಭಾಗವಹಿಸಬಹುದಾಗಿದೆ. |
| ಇ) | ಸರ್ಕಾರವು ಕೆ.ಟಿ.ಪಿ.ಪಿ. ಕಾಯ್ದೆಯನ್ನು ಅವಶ್ಯವಿದ್ದಲ್ಲಿ ಸೂಕ್ತ ಮಾರ್ಪಾಡು ಮಾಡಿ ರೈತರಿಗೆ ಯೋಜನೆಯ ಸಂಪೂರ್ಣ ಲಾಭಸಿಗುವ ವ್ಯವಸ್ಥೆ ಮಾಡಲು ಸರ್ಕಾರಕ್ಕೆ ಸಾಧ್ಯವಾಗುವುದಿಲ್ಲವೇ? | 2021-22ನೇ ಸಾಲಿನ ಆಯವ್ಯಯದಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ "ಗಂಗಾ ಕಲ್ಯಾಣ ಯೋಜನೆಯನ್ನು ಪಾರದರ್ಶಕವಾಗಿ ಮತ್ತು ನಿಗದಿತ ಅವಧಿಯೊಳಗೆ ರೈತ ಫಲಾನುಭವಿಗಳಿಗೆ ತಲುಪಿಸಲು ಅನುಷ್ಠಾನ ವಿವೇಚನೆ ಫಲಾನುಭವಿಯ ಕೈಗೆ ಎಂಬ ನೂತನ ವಿಧಾನವನ್ನು ಜಾರಿಗೆ ತರಲಾಗುವುದೆಂದು ಘೋಷಿಸಲಾಗಿರುತ್ತದೆ" ಇದರಂತೆ ಗಂಗಾ ಕಲ್ಯಾಣ ಯೋಜನೆ ಅನುಷ್ಠಾನಕ್ಕೆ ಅಳವಡಿಸಿಕೊಳ್ಳಬೇಕಾದ ಮಾರ್ಗಸೂಚಿಗಳ ಬಗ್ಗೆ ಪ್ರಸ್ತಾವನೆ ಸರ್ಕಾರದ ಪರಿಶೀಲನೆಯಲ್ಲಿರುತ್ತದೆ. |

ಸಂಖ್ಯೆ: ಸಕಇ 429 ಎಸ್‌ಡಿಸಿ 2021

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.